'ಮುಂಜಾವು' ಜಾಹೀರಾತು ದರ
(ಪ್ರತಿ ಕಾಲಂ ಸೆಂ. ಮೀ. ಗೆ)
ಮುಖಪುಟದಲ್ಲಿ: ೫ ರೂ.
ಇತರ ಪುಟಗಳಲ್ಲಿ: ೪ ರೂ.

# ಮುಂಜಾವು

ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'ಮುಂಜಾವು' ಚಂದಾ ದರ
ಬಿಡಿ ಪ್ರತಿ ೪೦ ಪೈಸೆ
ವಾರ್ಷಿಕ ಚಂದಾ ೨೦ ರೂಪಾಯಿ
ಆಜೀವ ಚಂದಾ ೨೦೦ ರೂಪಾಯಿ

ಸಂಪುಟ ೧ ಕೊಪ್ಪ ೧೫-೮-೮೨ ಭಾನುವಾರ ಸಂಚಿಕೆ ೧ ಬೆಲೆ ೪೦ ಪೈಸೆ

## ಶೃಂಗೇರಿ ತಾಲ್ಲೂಕಿನಲ್ಲಿ ಸದ್ಯದಲ್ಲೇ ಹರಿಜನರಿಗೆ ಜಮೀನು ನೀಡಿಕೆ

## ಮುಂಜಾವಿನ ದನಿ

ನಿಮ್ಮ ಮೆಚ್ಚಿನ ಪತ್ರಿಕೆ ಈಗ ಹೊಸ ಹೆಸರಿನಿಂದ ಪ್ರಕಟವಾಗುತ್ತಿದೆ. ಖಾಸಗಿ ಪ್ರಸಾರದಲ್ಲಿ, ಪ್ರಾಯೋಗಿಕವಾಗಿ 'ದೀವಟಿಗೆ' ಪ್ರಾರಂಭಿಸಿದಾಗ ಇಟ್ಟುಕೊಂಡಿದ್ದ ಗುರಿಯ ಬಗ್ಗೆ ಈಗ ಇನ್ನಷ್ಟು ವ್ಯವಸ್ಥಿತವಾಗಿ ಕೆಲಸ ಮಾಡಲು ಸಾಧ್ಯವಾಗಬಹುದು.

'ದೀವಟಿಗೆ' ಎಂಬ ಹೆಸರು ಮಂಜೂರಾಗದಿದ್ದಲ್ಲಿ ಅದರ ಬದಲಿಗೆ ನಾನು ಸೂಚಿಸಿದ್ದ ಐದಾರು ಹೆಸರುಗಳಲ್ಲಿ 'ಮುಂಜಾವು' ಕೂಡ ಒಂದು. ಅದನ್ನು ಸೂಚಿಸುವಾಗ ನನ್ನ ಮನಸ್ಸಿನ ಮುಂದಿದ್ದುದು ಇವತ್ತಿನ ನಮ್ಮ ಸಮಾಜ.

ಬೆಳಗಾಗುವ ಮೊದಲಿನ ಘಟ್ಟ ಮುಂಜಾವು. ನಿದ್ರೆಯಿಂದೆದ್ದು ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸುವ ಪ್ರಾಣಿ-ಪಕ್ಷಿಗಳ ಕಲರವ-ಕೂಗುಗಳಿಂದ ಎಚ್ಚರಗೊಂಡವರು ಎದ್ದು ತಮ್ಮ ಕೆಲಸಕಾರ್ಯಗಳನ್ನು ಪ್ರಾರಂಭಿಸುತ್ತಾರೆ. ಕೆಲವರಿಗೆ ಎಚ್ಚರವಾದರೂ ಏಳುವ ಮನಸ್ಸಿಲ್ಲದೆ ಪುನಃ ಮುಸುಕು ಹಾಕುತ್ತಾರೆ, ಜಡತೆಯಿಂದ-ನಿರುತ್ಸಾಹದಿಂದ. ಇನ್ನು ಕೆಲವರಿಗೆ ಎಚ್ಚರವಾಗುವುದೇ ಇಲ್ಲ.

ನಮ್ಮ ಸಮಾಜ ಸ್ವಾತಂತ್ರ್ಯದ ಘಳಿಗೆಯಲ್ಲಿ ರಾತ್ರಿಯಿಂದ ಹಗಲಿಗೆ ಕಾಲಿಟ್ಟಿತೆಂದು ಎಲ್ಲರೂ ಅಂದುಕೊಂಡಿದ್ದು ನಿಜ. ಆದರೆ, ಇಂದು ಸ್ವಾತಂತ್ರ್ಯದ ೩೬ನೆಯ ವರ್ಷಕ್ಕೆ ಕಾಲಿಡುತ್ತಿರುವಾಗ ಹಿಂದೆ ತಿರುಗಿ ನೋಡಿದರೆ, ನಾವು ಅಂದು ಇಳಿದದ್ದು ಸಂಜೆಗತ್ತಲಿನಿಂದ ದಟ್ಟ ರಾತ್ರಿಗೆ ಎಂದು ಅನ್ನಿಸುತ್ತದೆ. ಆದರೆ ಈ ದೀರ್ಘ ಕತ್ತಲಿನ ನಡುವೆ ಕೂಡ ಸಮಾಜದ ದೇಹ-ಮನಸ್ಸುಗಳಲ್ಲಿ ಹಲವಾರು ಬದಲಾವಣೆಗಳಾಗಿವೆ, ಆಗುತ್ತಿವೆ.

ಜನ ಸಂಘಟನೆಗೊಳ್ಳುತ್ತಿದ್ದಾರೆ. ಒಬ್ಬೊಬ್ಬರೇ ಜೀವಮಾನ ಪೂರ್ತಿ ಹೆಣಗಿದರೂ ನೀಗಲಾಗದ ಸಮಸ್ಯೆಗಳನ್ನು ಒಟ್ಟಾಗಿ ಪರಿಹರಿಸಿಕೊಳ್ಳುವತ್ತ ಜನ ನಡೆದಿದ್ದಾರೆ. ವಿದ್ಯಾರ್ಥಿಗಳು, ರೈತರು, ಕಾರ್ಮಿಕರು, ನಾಗರಿಕರು, ಕೂಲಿಗಳು, ದಲಿತರು–ಹೀಗೆ ವಿವಿಧ ಜನವರ್ಗ ಒಂದೊಂದು ಸಾಮೂಹಿಕ ಗುರಿ ಇಟ್ಟುಕೊಂಡು ಒಟ್ಟಾಗುತ್ತಿದೆ. ಒಂದು ವರ್ಗದ ಸಮಸ್ಯೆ ಬಗೆಹರಿವಾಗ ಅದರ ಪರಿಣಾಮ ಇಡೀ ದೇಶದ ಮೇಲೆ ಆಗಬಹುದು; ಸಮಸ್ಯೆಯ ಮೂಲವಾದ ಪರಿಸ್ಥಿತಿಯೇ ಬುಡಸಹಿತ ಎದಲಾಗಲೂಬಹುದು.

ಈ ಎಲ್ಲ ಬೆಳವಣಿಗೆಗಳ ಕಲರವ, ಗದ್ದಲ, ಕೂಗು ಹೆಚ್ಚು ಹೆಚ್ಚು ಜನರನ್ನ ಎಚ್ಚರಿಸುತ್ತಿದೆ, ಅವರ ಕಣ್ಣು ತೆರೆಸುತ್ತಿದೆ. ಇದು ಸಮಾಜದ ಮುಂಜಾವು; ನಿರ್ಮಲ, ಉಜ್ವಲ ಭವಿಷ್ಯದ ಮೊದಲ ಘಟ್ಟ.... – ಇದು ನನ್ನ ದೃಷ್ಟಿ.

ಈ ಪ್ರಶಾಂತ, ಪ್ರಶಸ್ತ ಮತ್ತು ಅಷ್ಟೇ ಗಲಿಬಿಲಿಯ ಘಳಿಗೆಯಲ್ಲಿ ನಿಮ್ಮ ಈ ಪತ್ರಿಕೆಯೂ ತನ್ನ ಕೂಗನ್ನು ಹಾಕಲು ದನಿ ಎತ್ತಿದೆ-ಹತ್ತು ದನಿಗಳ ಜೊತೆ ನಮ್ಮದೂ ಒಂದು.

ದನಿ ಎತ್ತುವುದು ಮುಖ್ಯ. ಅದು 'ನಾಲ್ಕು ಜನರಿಗೆ' ಕೇಳಿಸಿ ಅವರನ್ನು ಎಚ್ಚರಿಸೀತೆಂಬ ಆಸೆ ಆ ದನಿಗೆ ಸ್ಫೂರ್ತಿ.

–ಸಿರಿಮನೆ ನಾಗರಾಜ್.

ಶೃಂಗೇರಿ: ಈ ತಾಲ್ಲೂಕಿನಲ್ಲಿ ಜಮೀನಿಗಾಗಿ ದರ್ಖಾಸ್ತು ಸಲ್ಲಿಸಿರುವ ಹರಿಜನರ ಪೈಕಿ ಕೆಲವರಿಗೆ ಇಷ್ಟರಲ್ಲೇ ಹಕ್ಕುಪತ್ರ ನೀಡಲಾಗುವುದೆಂದು ಸಂಬಂಧಿತವಾಗಿ ತಿಳಿದುಬಂದಿದೆ.

ಕಾವಡಿ ಗ್ರಾಮದ ೮೪ನೇ ಸ. ನಂಬ್ರದಲ್ಲಿ ೧೫ ಜನರಿಗೆ ಸುಮಾರು ೩೦ ಎಕರೆ ಭೂಮಿ ದರ್ಖಾಸ್ತು ಸಮಿತಿಯಿಂದ ವಿಲೇವಾರಿ ಆಗಿದ್ದು ಈ ತಿಂಗಳ ೨೮ರ ಹೊತ್ತಿಗೆ ಬೇಗಾನೆ ರಾಮಯ್ಯನವರ ಕೈಯಿಂದ ಹಕ್ಕುಪತ್ರ ಕೊಡಿಸಲಾಗುವುದೆಂದು ತಿಳಿದುಬಂದಿದೆ.

ಇದೇ ವ್ಯಾಪ್ತಿಯಲ್ಲಿ ಇನ್ನಷ್ಟು ಜಾಗಕ್ಕಾಗಿ ಬೆಳಂದೂರು ಗ್ರಾಮದ ಮೂವರು ಅರ್ಜಿ ಸಲ್ಲಿಸಿದ್ದು, ಸಾಗುವಳಿಯೋಗ್ಯ ಭೂಮಿ ಇಲ್ಲದ್ದರಿಂದ ಅವರಿಗೆ ಬೆಳಂದೂರು ಗ್ರಾಮದಲ್ಲೇ ಭೂಮಿ ಕೊಡಲಾಗುವುದೆಂದೂ ಗೊತ್ತಾಗಿದೆ.

ಈ ಜಮೀನಿಗೆ ಅರ್ಜಿಸಲ್ಲಿಸಿದ ಸಂದರ್ಭದಲ್ಲಿ (ಮೇ೬) ಹರಿಜನರು ಮಂತ್ರಿಗಳಿಗೆ ಹಳೇ ನೆನಪು ಮಾಡಿಕೊಟ್ಟು "ಚುರುಕು ಮುಟ್ಟಿಸಿದ್ದನ್ನೂ", ಶೀಘ್ರದಲ್ಲಿ ಮಂಜೂರು ಮಾಡಿಸಿ, ತಾವೇ ಖುದ್ದು ಹಕ್ಕುಪತ್ರ ನೀಡುವುದಾಗಿ ಬೇಗಾನೆ ತಮ್ಮ ನಿರ್ಧಾರ ಘೋಷಿಸಿದ್ದನ್ನೂ ಇಲ್ಲಿ ಜ್ಞಾಪಿಸಬಹುದು (೨೫-೫-೮೨ರ 'ದೀವಟಿಗೆ'ಯಲ್ಲಿ 'ಬೇಗಾನೆಗೆ ಚುರುಕು ಮುಟ್ಟಿಸಿದ ಕಾವಡಿ ಹರಿಜನರು' ನೋಡಿ)

### ದಲಿತ ಸಂಘರ್ಷ ಸಮಿತಿ ಪಾತ್ರ

ಈ ದರ್ಖಾಸ್ತಿನ ವಿಷಯದಲ್ಲಿ ದಲಿತ ಸಂಘರ್ಷ ಸಮಿತಿಯ ಶೃಂಗೇರಿ ತಾ॥ ಶಾಖೆಯ ಕಾರ್ಯಕರ್ತರು ಬಹಳ ಶ್ರಮಿಸಿದ್ದಾರೆ. ತಾಲೂಕಿನ ಹಲವಾರು ಕಡೆ ಅವರುಗಳು ಸಂಚರಿಸಿ, ಜಮೀನಿಲ್ಲದ ದಲಿತರಿಂದ (ಹರಿಜನರು ಮಾತ್ರವಲ್ಲ) ದರ್ಖಾಸ್ತುಗಳನ್ನು ಕೊಡಿಸಿ, ಅವರ ಮುಂದಾಳಾಗಿ ಪ್ರಯತ್ನ ನಡೆಸಿದ್ದಾರೆ. ವಿವಿಧ ಕಡೆಗಳಲ್ಲಿ ಸುಮಾರು ೮೦ ಕ್ಕೂ ಹೆಚ್ಚು ಜನ ತಲಾ ೩-೩ ಎಕರೆಗಳಂತೆ ದರ್ಖಾಸ್ತು ಸಲ್ಲಿಸಿದ್ದಾರೆ.

### ಸರಕಾರಿ ಯಂತ್ರ

ಸರಕಾರಿ ಯಂತ್ರ ಇನ್ನೂ ಸ್ವಲ್ಪ ಸಹಕರಿಸುವಂತಿದ್ದರೆ ಈ ಸ್ವಯಂಸೇವಕ ಯುವಕರ ಕೆಲಸ ಹೆಚ್ಚು ಸುಗಮವಾಗುತ್ತಿತ್ತು. ಎಲ್ಲಾ ಸಾಗುವಳಿ ಯೋಗ್ಯ ಭೂಮಿ ದೊರೆಯುವುದೇ ಕಷ್ಟವಾಗುವುದರಿಂದ, ಇದ್ದ ಬದ್ದ ಭೂಮಿಯೆಲ್ಲಾ ಒತ್ತುವರಿ ಅಥವಾ ಅರಣ್ಯ ಇಲಾಖೆಗೆ ಸೇರಿದ್ದೇ ಆಗಿರುವ ಈಗಿನ ಪರಿಸ್ಥಿತಿಯಲ್ಲಿ, ಕಂದಾಯ ಇಲಾಖೆಯ ವ್ಯಾಪ್ತಿಗೆ ಬರುವ ಭೂಮಿ, ಅದರ ಸರ್ವೆ ನಂಬ್ರ, ವಿಸ್ತೀರ್ಣ ಮುಂತಾದ ವಿವರಗಳನ್ನು ಸಂಬಂಧಪಟ್ಟವರು ಕಾರ್ಯಕರ್ತರಿಗೆ ಸುಲಭದಲ್ಲಿ ಕೊಟ್ಟು ಸಹಕರಿಸುವುದಾದರೆ, ಸರ್ಕಾರ ವಿಫಲವಾಗುತ್ತಿರುವ ಕಡೆ ದಲಿತರ ಸ್ವಪ್ರಯತ್ನದಿಂದಾದರೂ ಅವರಿಗೆ ಅಷ್ಟಿಷ್ಟು (ಉಳ್ಳವರು ಉಳಿಸಿ ಬಿಟ್ಟಿದ್ದನ್ನು) ಭೂಮಿ ಸಿಕ್ಕೀತು.

## ವ್ಯಾನಿನ ಇಂಜಿನ್ ಕಳಚಿ ಮಾರಿದ ಆರೋಪ: ಇಬ್ಬರ ಬಂಧನ

ಕೊಪ್ಪ: ಮೆಟಡೋರ್ ವ್ಯಾನಿನ ಇಂಜಿನ್ನನ್ನು ಅನಧಿಕೃತವಾಗಿ ಕಳಚಿ ಮಾರಿದ ಆರೋಪದ ಮೇಲೆ ಕೊಪ್ಪ ಪೋಲೀಸರು ಇಲ್ಲಿನ ದೊಡ್ಡ ವ್ಯಾಪಾರಿಗಳಾದ ಯುಬಿಆರ್ ಭಾಸ್ಕರರಾಯರ ಮಗ ಸೂರ್ಯನಾರಾಯಣ ಮತ್ತು ಬಾಬುಶೆಟ್ಟರ ಮಗ ಅಶೋಕ್ ಎಂಬ ಇಬ್ಬರನ್ನು ೫. ೧೯ರಂದು ಬಂಧಿಸಿದ್ದಾರೆ. ಅವರ ಕಾರನ್ನು (ಸಿಎಎ [illegible]) ವಶಪಡಿಸಿಕೊಂಡಿದ್ದಾರೆ. ಇನ್ನೊಬ್ಬ ಆರೋಪಿ ಶ್ರೀಧರ ತಪ್ಪಿಸಿಕೊಂಡಿದ್ದಾನೆ.

ಸ. ರಾ. ಪ್ರಥಮ ನ್ಯಾಯಾಧೀಶರು ಆರೋಪಿಗಳನ್ನು ೧೦ ದಿನದವರೆಗೆ ಪೋಲೀಸ್ ವಶಕ್ಕೆ ಕೊಟ್ಟಿದ್ದಾರೆ. ತನಿಖೆ ನಡೆಯುತ್ತಿದೆ.

## ಮುಂಜಾವು

ಬಿ. ಟಿ. ಲಲಿತಾ ನಾಯಕ್

ಕಲ್ಲು ಮಣ್ಣು ಕಟ್ಟಿಗೆಗಳಿಗೆಲ್ಲ ಆಕಾರ ಕೊರೆದು
ಬಣ್ಣ ಬಣ್ಣದ ಚಿತ್ತಾರ ಬಿಡಿಸಿದಿರಿ
ರತ್ನ ವಜ್ರವ ತೊಡಿಸಿ ಪಟ್ಟೆಪೀತಾಂಬರ ಉಡಿಸಿ ಚೆಲುವ
ಚೆಲುವೆಯರ ಕೈಗೆ ಗದಾ–ಪದ್ಮಗಳ ಹಿಡಿಸಿದಿರಿ !
ಹತ್ತಾರು ಕೈಗಳನು ಹಲವಾರು ಮುಖಗಳನು
ಹಂದಿ ಆಮೆಗಳಂಥ ಅವತಾರ ಕಥೆಗಳನು
ಬೆಚ್ಚಿ ಬೀಳಿಸುವಂತೆ ಹೆಣೆದು ಹಾಡಿದಿರಿ
ಗಂಧ ಕರ್ಪೂರ ಬತ್ತಿ ಹೊಗೆಯಿಂದ ನಮಗೆ ಮತ್ತು ಬರಿಸಿ
ಮೋಕ್ಷ ಮುಕ್ತಿಗಳಂಥ ಉಕ್ತಿ ಹೇಳಿದಿರಿ
ಜನ್ಮಾಂತರ ಕರ್ಮ ಹಣೆಬರಹಗಳ ಬೊಗಳೆ ಸಾರುತ್ತ
ಹಸಿಯ ಮನದಲಿ ಭಯದ ಬೀಜ ಬಿತ್ತಿದಿರಿ
ಚಾಣಾಕ್ಷತನದಿಂದ ಮಣಿಸಿ ಕೈ ಮುಗಿಸಿದಿರಿ
ನರನರಗಳಲಿ ಸ್ವರ್ಗಸುಖವೆಂಬ ಕನಸ ಹರಿಸಿದಿರಿ
ಎಳೆ ಹರೆಯ ಬಾಲೆಯರು ಬಸಿರ್ಹೊತ್ತು ನಿಂತಾಗ
'ಗಾಳಿ-ಬೆಳಕಿನ ಕೂಟ' ವಿದೆಂದು ಅಪ್ಪಣೆಯ ಕೊಡಿಸಿದಿರಿ!
ಸಂದೇಹವಿಲ್ಲದೆಯೆ ನಾವಿದೆಲ್ಲವ ನಂಬಿದೆವು
ಬಂಡವಾಳದ ಮೊತ್ತ ಬಡಾಯಿಸಿಕೊಂಡಿರಿ ನೀವು
ಆಗ ನಿದ್ದೆ ಮಂಪರು ನಮಗೆ ಜೋರಾಗಿ ಕವಿದಿತ್ತು
ನಿಮ್ಮ ಕಣ್ಣು ಮುಚ್ಚಾಲೆಯಾಟ ಭರದಿ ನಡೆದಿತ್ತು
ಈಗ ಹಕ್ಕಿ ಪಕ್ಷಿಗಳೆಲ್ಲ ಕೂಗಿ ಎಚ್ಚರಿಸುತಿವೆ ನಮ್ಮನ್ನ
ಮುಂಜಾವಿನ ಬೆಳಕು ಕಣ್ಣು ತೆರೆಯುತಿದೆ
ದೀರ್ಘ ರಾತ್ರಿಯ ಮೌನ ದೂರವಾಗಿದೆ ಇನ್ನು
ಬಾಯಿ ಬಂದಿದೆ ನಮಗೆ ಹೊಸ ದೃಷ್ಟಿ ಕೂಡ
ನಮ್ಮೆದೆಯ ನೋಯಿಸುವ ನಿಮ್ಮ ಕಾಲಿಗೆ ಪೂಜೆ
ಸಲ್ಲಬಹುದೆಂಬ ಕನಸ ಕಾಣುವ ನೀವು
ಬರುತ್ತಿದ್ದೇವೆ ಬಿರುಗಾಳಿಯಾಗಿ
ಗುಡುಗಾಗಿ ಸಿಡಿಲಾಗಿ
ಇನ್ನು ತಡೆಯಲಾರಿರಿ ನಮ್ಮ
ನೀವು ನಿಲ್ಲಿ !

(ಸೌಜನ್ಯ: 'ಪಂಚಮ')

# ಶೃಂಗೇರಿ ತಾಲ್ಲೂಕು ಸಹಾಯಕ ವಿದ್ಯಾಧಿಕಾರಿಗಳ ಪ್ರತಿಕ್ರಿಯೆ

ಶೃಂಗೇರಿ: ಇಲ್ಲಿನ ಸ॥ವಿದ್ಯಾಧಿಕಾರಿಗಳ ಬಗ್ಗೆ ಜು. ೧೮ರ 'ದೀವಟಿಗೆ'ಯಲ್ಲಿ ಪ್ರಕಟವಾಗಿದ್ದ ಓದುಗರೊಬ್ಬರ ('ಸಂಚಾರಿ') ಪತ್ರದ ಆಪಾದನೆಗಳು ಹುರುಳಿಲ್ಲದವು ಎಂದು 'ದೀವಟಿಗೆ'ಗೆ ತಿಳಿಸಲಾಗಿದೆ.

ಕಚೇರಿಯಲ್ಲಿಳ ಗುಮಾಸ್ತರ ಹುದ್ದೆಗಳಲ್ಲಿ ೩ ಖಾಲಿ, ಒಬ್ಬರು ರಜೆಯ ಮೇಲಿದ್ದು ಒಬ್ಬ ರು ಮುಖ್ಯ ಗುಮಾಸ್ತರು ಮಾತ್ರ ಇದ್ದಾರೆ; ಒಬ್ಬ ಉಪಾಧ್ಯಾಯರನ್ನು ಕಚೇರಿಗೆ ತಾತ್ಕಾಲಿಕವಾಗಿ ವರ್ಗಮಾಡಿಕೊಂಡು ಕೆಲಸ ನಿರ್ವಹಿಸುತ್ತಿರುವುದಾಗಿ ತಿಳಿಸಿದ ಸ॥ ವಿದ್ಯಾಧಿಕಾರಿ ಟಿ. ಭೀಮಪ್ಪನವರು ಕಳೆದ ತಿಂಗಳು ತಾವು ಕೆಲವು ದಿನ ರಜದ ಮೇಲಿದ್ದುದರಿಂದ ಸಂಬಳ ೬ ದಿನ ತಡವಾಯಿತೇ ಹೊರತು, ಉಳಿದ ಯಾವ ತಿಂಗಳಲ್ಲೂ ತಡವಾಗಿಲ್ಲವೆಂದೂ ಬಹಳ ಕಷ್ಟದಿಂದಲೇ ಕಚೇರಿ ಕೆಲಸ ನಿರ್ವಹಿಸಿಕೊಂಡು ಹೋಗುತ್ತಿರುವುದಾಗಿಯೂ ತಿಳಿಸಿದರು.

ಅವರ ಹೇಳಿಕೆಯ ಕೆಲವು ಪ್ರಮುಖ ಅಂಶಗಳು ಹೀಗಿವೆ:

ಕೆಲವುಹಿರಿಯ ಅಧ್ಯಾಪಕರು ಮುಖ್ಯೋಪಾಧ್ಯಾಯರ ಜವಾಬ್ದಾರಿ ತಮಗೆ ಬೇಡವೆಂದು ವಿನಂತಿಸಿದ್ದರಿಂದ ಕಿರಿಯರನ್ನು ಆ ಹುದ್ದೆಗೆ ತರಲಾಗಿದೆ; ಎಲ್ಲೂ ಸೇವಾ ಹಿರಿತನ ಕಡೆಗಣಿಸಿಲ್ಲ.

ಶಿಕ್ಷಕರ ಭವನಕ್ಕಾಗಿ ಪುರಸಭಾಧ್ಯಕ್ಷರ ಮುಂದಾಳತ್ವದಲ್ಲಿ ಸಮಿತಿಯೇ ಇದ್ದು, ಈವರೆಗೆ ೫೦ ಸಾವಿರ ರೂ. ಸಂಗ್ರಹವಾಗಿ, ಸರ್ಕಾರದಿಂದಲೂ ೫೦ ಸಾವಿರ ರೂ. ಕೊಡುಗೆ ಬಂದಿದೆ. ಒತ್ತಾಯವಾಗಲೀ ಅವ್ಯವಹಾರವಾಗಲೀ ನಡೆದಿಲ್ಲ.

ತೀರ ತಪ್ಪಿತಸ್ಥ ಅಧ್ಯಾಪಕರ ವಿರುದ್ಧ ಮಾತ್ರ-ವಿಚಾರಣೆ ನಡೆಸಿ-ಡಿಡಿಪಿಐ ಸಲಹೆಯಂತೆ ಕ್ರಮ ತೆಗೆದುಕೊಂಡಿದೆ, ದ್ವೇಷ ಸಾಧನೆಗಾಗಿ ಅಲ್ಲ.

ಗಂಡ ಹೆಂಡಿರಿಬ್ಬರೂ ಅಧ್ಯಾಪಕರಾಗಿದ್ದಲ್ಲಿ ಇಬ್ಬರಲ್ಲೊಬ್ಬರು ಕಡ್ಡಾಯವಾಗಿ ಹಳ್ಳಿಯಲ್ಲಿ ಕೆಲಸ ಮಾಡುವಂತೆ ನೀತಿ ಇಟ್ಟುಕೊಳ್ಳಲಾಗಿದೆ.

ಪಟ್ಟಣದ ಬಾಲಕಿಯರ ಹಿ.ಪ್ರಾ.ಶಾಲೆಯ ಹಣಕಾಸು, ಲೆಕ್ಕಪತ್ರವಸ್ತುಗಳ ಅಪಮರ್ಪಕತೆಯ ಬಗ್ಗೆ ತನಿಖೆ ನಡೆಸಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗಿದೆ.

ವಾರ್ಷಿಕ ವರ್ಗಾವರ್ಗಿಯಲ್ಲಿ ೧೧ ಜನರಿಗೆ ಅವರ ಜೊತೆ ಸಮಾಲೋಚಿಸಿ ಅವರ ಅರ್ಜಿಗಳಿಗನುಗುಣವಾಗಿಯೇ ವರ್ಗ ಮಾಡಲಾಗಿದೆ. ಯಾರನ್ನು ಮನ ಬಂದಂತೆ ವರ್ಗ ಮಾಡಿಲ್ಲ.........ಇತ್ಯಾದಿ

—ಇದಲ್ಲದೆ, ಹಲವಾರು ಅಧ್ಯಾಪಕರಿಂದ ಮತ್ತು ಸಾರ್ವಜನಿಕರಿಂದ ಪತ್ರಗಳು ಬಂದಿವೆ.

ಕಿಗ್ಗಿ ಶಾಲೆಯ ಅಭಿವೃದ್ಧಿ ಸಮಿತಿ ಸದಸ್ಯರು ಮತ್ತು ಗ್ರಾಮಸ್ಥರು (೧೯ ಸಹಿಗಳೊಂದಿಗೆ) ಬರೆದ ಪತ್ರದಲ್ಲಿ ತಮ್ಮ ಶಾಲೆಯ ಬಗೆಗಿನ ಆರೋಪಗಳನ್ನು ಪರಿಶೀಲಿಸಿದಾಗ ಅವೆಲ್ಲ ಸುಳ್ಳೆಂದು ಸಾಬೀತಾಗಿರುವುದಾಗಿ ತಿಳಿಸಿದ್ದಾರೆ. ಅಲ್ಲಿನ ಅಧ್ಯಾಪಕರು, ಆರೇಳು ವರ್ಷಗಳಿಂದ ತಾವು ಈ ಊರಿನ ಜನರ ಮೆಚ್ಚುಗೆಗಳಿಸಿ ಕೆಲಸ ಮಾಡುತ್ತಿರುವುದಾಗಿಯೂ, ತಮ್ಮ ಬಗೆಗಿನ ಆರೋಪ ಸತ್ಯಕ್ಕೆ ದೂರವಾದ್ದೆಂದೂ ಬರೆದಿದ್ದಾರೆ. ಅದೇಊರಿನ ಮರಟಿಯ ಎಂ.ಎಸ್. ಶ್ರೀನಾಥ್ ಎಂಬುವವರು, ಶಾಲೆಯ ಎದುರು ಸತ್ತ ದನ ತಮ್ಮದೆಂದೂ, ತಮ್ಮ ಜನರೊಂದಿಗೆ ತಾನೇ ಅದನ್ನು ದಫನ್ ಮಾಡಿದ್ದಾಗಿಯೂ ತಿಳಿಸಿದ್ದಾರೆ. (ಇವರು "ಇಂತಹ ಮೂರೂ ಮತ್ತೊಂದು ದಿನಕ್ಕೆ ಸಾಯಿ ಕೊ ಯಂತೆ

(೩ನೇ ಪುಟಕ್ಕೆ)

# ಅರುಣ್ ಶೌರಿಗೆ ಮ್ಯಾಗ್ಸೇಸೆ ಪ್ರಶಸ್ತಿ

'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆ ಕಾರ್ಯ ನಿರ್ವಾಹಕ ಸಂಪಾದಕರಾಗಿರು ಅರುಣ್ ಶೌರಿಗೆ ಫಿಲಿಪ್ಪೀನ್ಸ್ ದೇಶ ಮ್ಯಾಗ್ಸೇಸೆ ಪ್ರಶಸ್ತಿ ಲಭಿಸಿದೆ.

ಪ್ರಪಂಚದ ಮಟ್ಟದಲ್ಲಿ ನೊಬೆಲ್ ಪ್ರಶಸ್ತಿಗಿರುವಂಥದೇ ಗೌರವ ಏಷ್ಯದ ಮಟ್ಟ ಈ ಪ್ರಶಸ್ತಿಗಿದೆ. ಪ್ರಶಸ್ತಿಯೊಂದಿಗೆ ಚಿನ್ನ ಪದಕ ಮತ್ತು ೨೦ ಸಾವಿರ ಡಾಲರ್ ನಗದು ಬಹುಮಾನ ಇರುತ್ತದೆ.

ಕಳೆದ ಮೇ ತಿಂಗಳಲ್ಲಷ್ಟೆ ಶೌರಿ 'ಅಂತ ರಾಷ್ಟ್ರೀಯ ಸಂಪಾದಕ' ಎಂಬುದಾ ಪ್ರಶಸ್ತಿಗಳಿಸಿದ್ದರು.

ಅರ್ಥಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದಿರು ಶೌರಿ, ಏಳು ವರ್ಷ ವಿಶ್ವ ಬ್ಯಾಂಕ್‌ನ ಕೆಲಸ ಮಾಡಿದ್ದರು. ೧೯೭೯ರಲ್ಲಿ 'ಇಂಡಿಯನ್ ಎಕ್ಸ್‌ಪ್ರೆಸ್' ಸೇರಿದರು.

ತಮ್ಮ ಹರಿತವಾದ ಮತ್ತು ಅತ್ಯಂ ವಿವರವಾದ ತನಿಖಾ ವರದಿಗಳಿಂದ ಶೌ ಭಾರತೀಯ ಪತ್ರಿಕೋದ್ಯಮದಲ್ಲಿ ಒಂದು ಹೊಸ ಮೇಲ್ಪಂಕ್ತಿಯನ್ನೇ ಹಾಕಿದ್ದಾರೆ.

# "ಆಗಸ್ಟ್ ೧೫ ಭಾರತದ ಆತ್ಮವಂಚನೆಯ ದಿನ"

—ಎಂದು ಕರ್ನಾಟಕ ದಲಿತ ಸಂಘರ್ಷ ಸಮಿತಿ ಘೋಷಿಸಿದೆ. ಅಂದು ರಾಜ್ಯಾದ್ಯಂತ ಸಮಿತಿಯ ಶಾಖೆಗಳು ಮೆರವಣಿಗೆ, ಸಭೆ ನಡೆಸಿ, ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮ ನಡೆಸುತ್ತವೆ. ಈ ಸಂದರ್ಭದಲ್ಲಿ ಸಮಿತಿ ನೀಡಿರುವ ಪತ್ರಿಕಾ ಹೇಳಿಕೆ ಹೀಗಿದೆ:

ಭಾರತಕ್ಕೆ ಸ್ವಾತಂತ್ರ್ಯ ಬಂತು ಅಂದುಕೊಂಡು ೩೪ ವರ್ಷಗಳಾದರೂ ಈ ನಾಡಿನ ಅಸಂಖ್ಯ ಗರೀಬ ಜೀವಗಳಿಗೆ, ಈ ನಾಡಿನ ಸಂಪತ್ತಿನ ಉತ್ಪಾದನೆಯಲ್ಲಿ ತೊಡಗಿರುವ ರೈತ ಕಾರ್ಮಿಕರಿಗೆ, "ಕೆಲಸ ಕೊಡಿ ಇಲ್ಲವೆ ಜೈಲಿಗೆ ತಳ್ಳಿ" ಎಂದು ಘೋಷಣೆ ಕೂಗುತ್ತ ಮೆರವಣಿಗೆ ನಡೆಸುವ ವಿದ್ಯಾವಂತ ನಿರುದ್ಯೋಗಿ ಯುವಕ ಯುವತಿಯರಿಗೆ, ಹಿಂದೂ ಸಮಾಜದ ದಬ್ಬಾಳಿಕೆಗೆ ಬಲಿಯಾಗಿರುವ ಮಹಿಳೆ ಹಾಗೂ ಅಸ್ಪೃಶ್ಯರ ಪಾಲಿಗೆ ಸ್ವಾತಂತ್ರ್ಯ ಎಂಬುದು ಒಂದು ಕನಸಿನ ಕುಸುಮ. ಸ್ವಾತಂತ್ರ್ಯ ಪ್ರೇಮಿಗಳ ಬಲಿದಾನದ ಫಲವಾಗಿ ಬ್ರಿಟೀಷರಿಂದ ಅಧಿಕಾರ ಕಸಿದುಕೊಂಡು ಇಂಡಿಯಾದ ಮೇಲ್ಜಾತಿ ಮೇಲ್ವರ್ಗದ ಜನ ದೆಹಲಿಯ ಕೆಂಪು ಕೋಟೆಯ ಮೇಲೆ ಬಾವುಟ ಹಾರಿಸಿ ಮುಗ್ಧ ಶಾಲಾ ಮಕ್ಕಳಿಗೆ ಸಿಹಿ ತಿಂಡಿ ಹಂಚುವ ಸ್ವಾತಂತ್ರ್ಯ ದಿನಾಚರಣೆ ಎಂಬ ಬಹಿರಂಗ ವಂಚನೆ ಮಾತ್ರ ನಡೆದಿದೆ.

ಭಾರತಕ್ಕೆ ೨೦ ಸಾವಿರ ಕೋಟಿ ರೂಪಾಯಿ ವಿದೇಶ ಸಾಲ, ಪ್ರತಿವರ್ಷ ೫೦೦ ಕೋಟಿ ರೂ. ಬಡ್ಡಿ ತೆರುವುದು, ಇಂದಿರಾಗಾಂಧಿ ಆವಳಿತ ಸ್ವಾತಂತ್ರ್ಯ ದಿನಾಚರಣೆಗೆ ಕೊಟ್ಟ ಕೊಡುಗೆ. ಅಷ್ಟೇ ಅಲ್ಲದೆ ಪಂಚಾಯಿತಿ ಅಧ್ಯಕ್ಷನಿಂದ ಪ್ರಧಾನಿಯವರೆಗೆ ಹರಿಜನ ಗಿರಿಜನರ ಉದ್ಧಾರದ ಮಾತನಾಡುತ್ತಾರೆ. ಹರಿಜನ/ಗಿರಿಜನರ ಮಾನ ಪ್ರಾಣ ರಕ್ಷಣೆ ಆಗಿಲ್ಲ. ದೇವಲಿಯಲ್ಲಿ ೨೪, ಸಾಢುಪುರದಲ್ಲಿ ೧೩, ಈ ರೀತಿ ೪೦ ಸಾವಿರಕ್ಕೂ ಹೆಚ್ಚು ದಲಿತರ ಮೇಲೆ ಹಲ್ಲೆ ಕೊಲೆಗಳು ನಡೆದಿವೆ. ಉತ್ತರ ಪ್ರದೇಶದಲ್ಲಿ ೧೯೫, ಮಧ್ಯ ಪ್ರದೇಶದಲ್ಲಿ ೨೩೧, ಈ ರೀತಿ ಸಾವಿರಾರು ಹರಿಜನ/ಗಿರಿಜನ ಮಹಿಳೆಯರ ಮೇಲೆ ನಿರಂತರ ಅತ್ಯಾಚಾರಗಳು ನಿಂತಿಲ್ಲ. ಪ್ರತಿ ದಿನ ರೈತ ಕಾರ್ಮಿಕರ ಮೇಲೆ ಪೋಲೀಸ್ ಗೋಲಿಬಾರ್, ಲಾಠಿ, ಬೂಟಿನ ಆಮಾನುಷ ದಾಳಿಯಿಂದ ಹರಿಯುವ ರಕ್ತ. ಸಾವುಗಳನ್ನು ಕಣ್ಣಾರೆ ಕಂಡು ಯಾವ ನಾಲಿಗೆಯಲ್ಲಿ ನಾವು ಸ್ವತಂತ್ರರೆಂದು ಹೇಳುವುದು!

ಶ್ರೀಸಾಮಾನ್ಯನ ಸ್ವಾತಂತ್ರ್ಯ ಸಮಾನತೆ ಸೋದರತೆಯ ಸಮಾಧಿಯ ಮೇಲೆ ಬಾವುಟ ಹಾರಿಸುವ ಸ್ವಾತಂತ್ರ್ಯ ದಿನಾಚರಣೆಗೆ ನಮ್ಮ ಅಸಹಕಾರವಿದೆ, ಪ್ರತಿಭಟನೆಯಿದೆ, ವಿರೋಧವಿದೆ. ಈ ಸತ್ಯಸಂಗತಿಯಿಂದ ಜನರು ಜಾಗೃತರಾಗಬೇಕು.

**ಆರ್ಥಿಕ, ಸಾಮಾಜಿಕ ಸಮಾನತೆಯ ಸ್ವಾತಂತ್ರ್ಯಕ್ಕಾಗಿ ನಮ್ಮ ಹೋರಾಟ; ಹಸಿವು, ದಬ್ಬಾಳಿಕೆ, ಅತ್ಯಾಚಾರಗಳಿಲ್ಲದ ಸಮಾಜಕ್ಕಾಗಿ ನಮ್ಮ ಹೋರಾಟ.**



# ಹೊಟ್ಟೆ ಪಾಡಿಗಾಗಿ ಅಪಾಯಕಾರೀ ವೃತ್ತಿ ನೆರೆಯಲ್ಲಿ ಕುಂಟೆ ಹಿಡಿಯುವುದು

**ತೀರ್ಥಹಳ್ಳಿ :** ಮಲೆನಾಡಿನಲ್ಲಿ ಬಡವರು ಹೊಟ್ಟೆಪಾಡಿಗಾಗಿ ಕೈಗೊಳ್ಳುವ ಅತ್ಯಂತ ಅಪಾಯಕಾರೀ ಸಾಹಸದ ವೃತ್ತಿಗಳ ಪೈಕಿ ಪ್ರವಾಹದಲ್ಲಿ ತೇಲಿಬರುವ ಕುಂಟೆಗಳನ್ನು ಹಿಡಿಯುವುದೂ ಒಂದು. ಪ್ರತಿವರ್ಷವೂ ನೆರೆಯಲ್ಲಿ ಭಾರಿ ಭಾರಿ ಮರದ ಹರೆಗಳು, ಕುಂಟೆಗಳು ತೇಲಿಬರುತ್ತಿರುತ್ತವೆ. ನದಿಯ ದಂಡೆಗಳಲ್ಲಿ ನಿಂತು ಹಲವಾರು ಜನ ಅವುಗಳನ್ನು ಹಿಡಿದು, ದಡಕ್ಕೆಳೆದು ಮನೆಗೆ ಒಯ್ಯುತ್ತಾರೆ ಅಥವಾ ಮಾರುತ್ತಾರೆ.

ಮೊನ್ನೆಯ ನೆರೆಯಲ್ಲಿ ಇಲ್ಲಿನ ಕುಶಾವತಿಯ ಪ್ರವಾಹದಲ್ಲಿ ತೇಲಿಬರುತ್ತಿದ್ದ ಕುಂಟೆ ಹಿಡಿಯುವ ಪ್ರಯತ್ನದಲ್ಲಿ ಸೊಪ್ಪುಗುಡ್ಡೆ ವಾಸಿ ಕುಶಾಲ ಶೆಟ್ಟರ ಮೊಮ್ಮಗ ಎಂದು ಹೇಳಲಾಗಿರುವ ಯುವಕನೊಬ್ಬ ದುರಂತವನ್ನಪ್ಪಿದ್ದಾಗಿ ವರದಿಯಾಗಿದೆ. ತೀವ್ರಶೋಧನೆ ನಡೆಸಿದರೂ ಶವ ಪತ್ತೆಯಾಗಿಲ್ಲವೆನ್ನಲಾಗಿದೆ.

ಈ ರೀತಿ ಈ ದುಸ್ಸಾಹಸದಿಂದ ಪ್ರಾಣಹಾನಿ ಆಗುವ ಅನೇಕ ಪ್ರಕರಣಗಳು ವರದಿ

(೩ನೇ ಪುಟಕ್ಕೆ)

## ಓದುಗರ ಪತ್ರಗಳು

### ಕಿಗ್ಗಕ್ಕೆ ವಿದ್ಯುತ್ ಇಲಾಖೆಯ ಖಾಯಂ ಲೈನ್‌ಮನ್ ಬೇಕು

ಶೃಂಗೇರಿಯಿಂದ ೮ ಕಿ. ಮೀ. ದೂರದ ಜನ ಕಿಗ್ಗದ ವಿದ್ಯುದ್ದೀಪದ ಸೌಕರ್ಯ ಸಮರ್ಪಕವಾಗಿಲ್ಲ. ವಾರದಲ್ಲಿ ೨ ದಿನ ದೀಪವಿದ್ದರೆ ಹೆಚ್ಚು ಎಂಬಂತಾಗಿದೆ. ಒಂದು ದಿನ ಕತ್ತಲಲ್ಲಿ ಕಳೆದು (ಕಾಯುತ್ತ) ೨ನೇ ದಿನ ಸಾವು ಶೃಂಗೇರಿಗೆ ಹೋಗಿ ದೂರು ಕೊಟ್ಟು ಅವರು ಬಂದು ರಿಪೇರಿ ಮಾಡಿ ಹೋಗುವುದರೊಳಗೆ ಪುನಃ ಕೆಟ್ಟಿರುತ್ತದೆ. ಉಳಿದರೂ ಒಂದೆರಡು ದಿನ ಅಷ್ಟೆ. ಆದ್ದರಿಂದ ಸಂಬಂಧಪಟ್ಟವರು ಇಲ್ಲಿಗೆ ಇಲಾಖೆಯ ಒಬ್ಬ ಲೈನ್‌ಮನ್‌ನನ್ನು ನೇಮಿಸಬೇಕಾಗಿ ಪ್ರಾರ್ಥಿಸುತ್ತೇವೆ.

**ಗ್ರಾಮಸ್ಥರು, ಕಿಗ್ಗ.**
(೫ ಜನರ ಸಹಿ ಇದೆ.)

### ಕಾರ್ಯದರ್ಶಿಗಳಿಲ್ಲ

ಮಾನ್ಯರೇ,

ನಿಟುವಾಗಿಲು ಗ್ರಾಮ ಪಂಚಾಯ್ತಿಯಲ್ಲಿ ಖಾಯಂ ಕಾರ್ಯದರ್ಶಿಗಳು ಇಲ್ಲದೆ ಜನರಿಗೆ ತುಂಬಾ ತೊಂದರೆಯಾಗಿದೆ. ಸುಮಾರು ೬ ತಿಂಗಳಿಂದ ಹರಿಹರಪುರದ ಗ್ರಾಮ ಪಂಚಾಯ್ತಿ ಕಾರ್ಯದರ್ಶಿಯವರೇ "ಇನ್‌ಚಾರ್ಜ್" ಆಗಿ ಕೆಲಸ ಮಾಡುತ್ತಲಿದ್ದಾರೆ. ತಹಸೀಲ್ದಾರರು ಇತ್ತ ಗಮನ ಹರಿಸಬೇಕಾಗಿ ಗ್ರಾಮಸ್ಥರು ಕೇಳಿಕೊಳ್ಳುತ್ತಾರೆ.

ಗ್ರಾಮಸ್ಥರ ಪರವಾಗಿ,
**–ಹೆಗ್ಗಾರು ಜಯಂತ್.**

### ಅಪಾಯಕಾರೀ ವೃತ್ತಿ

(೨ನೇ ಪುಟದಿಂದ)

ಯಾಗುತ್ತಿರುತ್ತನೆ. ಈ ವೃತ್ತಿಯಿಂದ ಬರುವ ಲಾಭಕ್ಕಿಂತ ಅಮೂಲ್ಯವಾದ ಜೀವ ಹಾನಿಯಾಗುವುದನ್ನು ಪರಿಗಣಿಸುವುದು ಮುಖ್ಯ. ಸರ್ಕಾರವಾದರೂ, ಸೆರೆಯಲ್ಲಿ ಕುಂಟೆ ಹಿಡಿಯುವುದನ್ನು ನಿಷೇಧಿಸುವುದು ಸೂಕ್ತ.

ಲೋಕೋಪಯೋಗಿ ಇಲಾಖೆ

## ಕಾರ್ಮಿಕರ ಮುಷ್ಕರ ಅಂತ್ಯ

ಸರ್ಕಾರ ನಿಗದಿ ಪಡಿಸಿರುವಂತೆ ೯ರೂ. ೪೦ ಪೈಸೆಯ ಕನಿಷ್ಠ ಕೂಲಿಯನ್ನು ಒಡನೆಯೇ ಜಾರಿ ಮಾಡಬೇಕೆಂದು ಒತ್ತಾಯಿಸಿ ಜು. ೧೯ರಿಂದ ನಡೆಯುತ್ತಿದ್ದ ಲೋಕೋಪಯೋಗಿ ಕಾರ್ಮಿಕರ ಮುಷ್ಕರವನ್ನು ಇಪ್ಪತ್ತನೆಯ ದಿನವಾದ ಆ. ೭ರಂದು ಮುಕ್ತಾಯಗೊಳಿಸಿರುವುದಾಗಿ ಜಿಲ್ಲಾ ಲೋಕೋಪಯೋಗಿ ಕೆಲಸಗಾರರ ಸಂಘದ ಪ್ರಧಾನ ಕಾರ್ಯದರ್ಶಿ ಬಿ. ಸಿ. ಸುಂದರೇಶ್ ತಿಳಿಸಿದ್ದಾರೆ.

ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್‌ರವರು ಲೋಕೋಪಯೋಗಿ ಕಾರ್ಮಿಕರ ರಾಜ್ಯ ಫೆಡರೇಶನ್ ಪ್ರತಿನಿಧಿಗಳಿಗೆ, ಬೇಡಿಕೆಗಳನ್ನು ಒಡನೆಯೇ ಈಡೇರಿಸುವ ಆಶ್ವಾಸನೆ ನೀಡಿದ್ದರ ಮೇರೆಗೆ ಕಾರ್ಮಿಕರು ತಮ್ಮ ಮುಷ್ಕರವನ್ನು ಹಿಂತೆಗೆದುಕೊಂಡಿದ್ದಾರೆಂದು ಅವರು ಹೇಳಿದ್ದಾರೆ.

ಮುಷ್ಕರದ ಯಶಸ್ಸಿಗೆ ಕಾರಣರಾದ ಕಾರ್ಮಿಕರಿಗೂ ಹಾಗೂ ಬೆಂಬಲಿಸಿದ ಸಂಘ ಸಂಸ್ಥೆಗಳ ಪ್ರತಿನಿಧಿಗಳಿಗೂ ಚಿಕ್ಕಮಗಳೂರು ಜಿಲ್ಲಾ ಲೋಕೋಪಯೋಗಿ ಕೆಲಸಗಾರರ ಸಂಘ ತನ್ನ ಕೃತಜ್ಞತೆಗಳನ್ನು ಅರ್ಪಿಸುತ್ತದೆಂದಿರುವ ಸುಂದರೇಶ್, ಒಂದೆಯೇ ಕನಿಷ್ಠ ಕೂಲಿಯನ್ನು ಜಾರಿ ಮಾಡಲು ತಡ ಮಾಡಿದಲ್ಲಿ ಪುನಃ ಚಳುವಳಿ ನಡೆಸುವುದಾಗಿ ಎಚ್ಚರಿಸಿದ್ದಾರೆ.

### ಕೊಪ್ಪದಲ್ಲಿ ರಾಷ್ಟ್ರ ಸೇವಿಕಾ ಸಮಿತಿಯ ಶಾಖೆ ಪ್ರಾರಂಭ

ಕೊಪ್ಪ: ಆಗಸ್ಟ್ ೭ರಂದು ಇಲ್ಲಿನ ಮಾತೃ ಮಂಡಳಿ ಆಶ್ರಯದಲ್ಲಿ ರಾಷ್ಟ್ರ ಸೇವಿಕಾ ಸಮಿತಿಯ ಶಾಖೆ ಪ್ರಾರಂಭಿಸಲಾಯಿತು ಮತ್ತು ಗುರುಪೂಜೆ, ರಕ್ಷಾ ಬಂಧನ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಚಿಕ್ಕಮಗಳೂರು ರಾ.ಸೇ.ಸ.ಯ ನಗರ ಕಾರ್ಯವಾಹಿನಿ ಶ್ರೀಮತಿ ಸುಧಾರವರು ಶಾಖೆ ಪ್ರಾರಂಭಿಸಿ, ಸಮಿತಿಯ ಪರಿಚಯ, ಉದ್ದೇಶ ಮತ್ತು ಗುರುಪೂಜೆ, ರಕ್ಷಾ ಬಂಧನದ ಮಹತ್ವಗಳನ್ನು ಸಂಕ್ಷಿಪ್ತವಾಗಿ ವಿವರಿಸಿದರು. ಶ್ರೀಮತಿ ಉಷಾ ರಂಗನಾಥನ್ ರವರ ಅಧ್ಯಕ್ಷತೆಯಲ್ಲಿ ನಡೆದ ಈ ಪರಿಚಯ ಸಮಾರಂಭದಲ್ಲಿ ವಿನುತ ದೇಶಭಕ್ತಿ ಗೀತೆ ಹಾಡಿದರು. ಶ್ರೀಮತಿ ಜಾನಕಿ ಸ್ವಾಗತಿಸಿದರು, ಶ್ರೀಮತಿ ರೋಹಿಣಿ ಭಟ್ ವಂದಿಸಿದರು.

### ಸೋಜಿ, ಮೈದಾ ದರ ಏರಿಕೆ

ಚಿಕ್ಕಮಗಳೂರು: ಆ. ೧೧ರಿಂದ ಮೈದಾ ಹಾಗೂ ಸೋಜಿ ಬೆಲೆಯನ್ನು ಆಹಾರ ಸರಬರಾಜು ನಿರ್ದೇಶಕರ ಆಜ್ಞೆಯ ಮೇರೆಗೆ ಕ್ವಿಂಟಾಲಿಗೆ ೫೦ರಿಂದ ೬೦ರೂ. ಗಳಿಗೆ ಏರಿಸಲಾಗಿದೆ.

### ದಯಂಬಳ್ಳಿಗೆ ಅಂಚೆ ಕಚೇರಿ

ಎನ್.ಆರ್.ಪುರ: ಸ್ವಲ್ಪಕಾಲ ಸಣ್ಣ ವಿವಾದಕ್ಕೊಳಗಾಗಿ ಈ ಭಾಗದ ಜನರಿಗೆ ಅಸಮಾಧಾನಕ್ಕೆ ಕಾರಣವಾಗಿದ್ದ ದಯಂಬಳ್ಳಿ ಅಂಚೆ ಕಚೇರಿಯ ಕೋರಿಕೆ ಮಂಜೂರಾಗಿ, ಜು. ೧೧ರಂದು ಉದ್ಘಾಟಿಸಲ್ಪಟ್ಟಿತು.

ಬಿ.ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ಪೋಸ್ಟಲ್ ಇನ್ಸ್‌ಪೆಕ್ಟರ್ ಕೆ. ಕೆ. ನಾಯಕ್ ಕಚೇರಿ ಉದ್ಘಾಟಿಸಿದರು. ಪಂ. ಅಧ್ಯಕ್ಷ ಹೆಚ್. ಟಿ. ರಾಮಪ್ಪ ಗೌಡ, ಬಿ. ಎನ್. ಹಾಲಪ್ಪ ಗೌಡ ಮತ್ತು ನಂಜುಂಡಭಟ್ ಮುಖ್ಯ ಅತಿಥಿಗಳಾಗಿದ್ದರು. ಡಿ.ಎ. ಶ್ರೀನಿವಾಸ್ ಸ್ವಾಗತಿಸಿದರು. ಹೆಚ್. ಟಿ. ರತ್ನಾಕರ್ ವಂದಿಸಿದರು.

### ಗಿರಿಜನರಿಗೆ ಉಚಿತ ನೀಡಿಕೆ

ಮೂಡಿಗೆರೆ: ೧೯೮೨-೮೩ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಗಿರಿಜನ ಅಭಿವೃದ್ಧಿ ಯೋಜನೆಯ ಅಂಗವಾಗಿ ಕೃಷಿ ಇಲಾಖೆಯಿಂದ ವ್ಯವಸಾಯ ಉಪಕರಣಗಳು, ರಾಸಾಯನಿಕ ಗೊಬ್ಬರಗಳು ಹಾಗೂ ಸಿಂಪರಣೆ ಯಂತ್ರಗಳ ವಿತರಣಾ ಸಮಾರಂಭ ಅರಮನೆ ತಲಗೂರಿನಲ್ಲಿ ಆ. ೮ರಂದು ನಡೆಯಿತು. ತಾಲ್ಲೂಕಿನ ೪ ಗ್ರಾಮಗಳ ೪೫ ಗಿರಿಜನರಿಗೆ ಸುಮಾರು ೫ಸಾವಿರ ರೂ. ಬೆಲೆಯ ವಸ್ತುಗಳನ್ನು ಉಚಿತವಾಗಿ ಹಂಚಲಾಯಿತು.

### ಜಿಲ್ಲಾ ಲೇಖಕರ ಸಂಘಕ್ಕೆ ಸದಸ್ಯರಾಗಲು ಕರೆ

ಚಿಕ್ಕಮಗಳೂರು: ಜಿಲ್ಲಾ ಲೇಖಕರ ಸಂಘಕ್ಕೆ ಸುಮಾರು ನಾಲ್ಕುವರ್ಷ ಕಾಲ ಅಧ್ಯಕ್ಷರಾಗಿದ್ದ ಹೆಚ್. ಎಸ್. ರಾಮಣ್ಣ ಅವರನ್ನು ಆ. ೯ರಂದು ಕಿರುಕಾಣಿಕೆ ನೀಡಿ ಸಾರ್ಥಕವಾಗಿ ಬೀಳ್ಕೊಡಲಾಯಿತು.

**ನೂತನ ಪದಾಧಿಕಾರಿಗಳು**

ಸಂಘಕ್ಕೆ ನೂತನ ಸಾಲಿಗೆ ಕೆ.ಆರ್. ನಾರಾಯಣ ಮೂರ್ತಿ (ಅಧ್ಯಕ್ಷ), ಮಲ್ಲಿಗೆನವಿಲೆ ನಾಗಭೂಷಣ (ಕಾರ್ಯದರ್ಶಿ), ಗೌರಿರು. ಓಂಕಾರಮ್ಮ, ಕು॥ ಹೆಚ್. ಪಿ. ಸುಕನ್ಯ (ಉಪಾಧ್ಯಕ್ಷರು), ಬಿ.ಎಸ್. ಶೇಷಾದ್ರಿ, ಬಿ.ಎನ್. ಜ್ವಾಲನಪ್ಪ (ಸಹ ಕಾರ್ಯ ದರ್ಶಿಗಳು), ಟಿ.ಡಿವಾಕರ್ (ಖಜಾಂಚಿ) ಆಯ್ಕೆಯಾಗಿದ್ದಾರಲ್ಲದೆ, ೧೭ಜನರ ಕಾರ್ಯಕಾರಿ ಸಮಿತಿ ರಚಿತವಾಗಿದೆ.

**ಜಿಲ್ಲೆಯ ಲೇಖಕರಿಗೆ ಕರೆ**

ಸಂಘದ ಸದಸ್ಯರಾಗಲು ಜಿಲ್ಲೆಯ ಎಲ್ಲಾ ಲೇಖಕ, ಬರಹಗಾರರಿಗೆ ಸಂಘ ಕರೆ ನೀಡಿದೆ ಸದಸ್ಯತ್ವ ಶುಲ್ಕ ೧೦ರೂ.ಗಳನ್ನು ಟಿ.ದಿವಾಕರ್, ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್ ರವರ ಕಚೇರಿ, ಚಿಕ್ಕಮಗಳೂರು– ಈ ವಿಳಾಸಕ್ಕೆ ಕಳಿಸಲು ಕೋರಲಾಗಿದೆ.

### ಭಾವೀ ಕೃಷಿಕ ಸಂಘದ ಕಾರ್ಯಕ್ರಮ

ಹುಹರಪುರ: ಇಲ್ಲಿನ ಕಿರಿಯ ಕಾಲೇಜಿನಲ್ಲಿ ಜುಲೈ ೨೮ರಂದು "ಭಾವೀ ಕೃಷಿಕ ಸಂಘ"ದ ೧೯೮೩-೮೪ನೇ ಸಾಲಿನ ಮೊದಲ ಕಾರ್ಯಕ್ರಮ ನಡೆಯಿತು.

ಪ್ರಾಂಶುಪಾಲ ಟಿ. ಎನ್. ಸತ್ಯನಾರಾಯಣ ಇವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಅನುಭವಿ ಕೃಷಿಕರಾದ ಕೆ. ಜಿ.ಎನ್. ಶಾಸ್ತ್ರಿ, ಕೆ.ಎಸ್.ಆರ್. ಉಡುಪ ಅನುಭವ ತಿಳಿಸಿದರು. ಸ್ಥಳೀಯ ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಪ್ರಭಾಕರ್ ಸದಸ್ಯರಿಗೆ ತರಕಾರಿ ಬೀಜ ವಿತರಿಸಿದರು. ಮಣಿಪಾಲಿನ ಕೃಷಿ ಪ್ರತಿಷ್ಠಾನ ಮತ್ತು ಸಿಂಡಿಕೇಟ್ ಬ್ಯಾಂಕ್‌ಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಈ ಕಾರ್ಯಕ್ರಮವನ್ನು ಬ್ಯಾಂಕ್ ನ ಕೃಷಿ ಅಧಿಕಾರಿ ಸುರೇಶ್ ಮತ್ತು ಕಾಲೇಜಿನ ಕೊಟ್ಟನಾರಿಯಾ ಅಧ್ಯಾಪಕ ಛಾಯಾಪತಿ ನಿರ್ವಹಿಸಿದರು.



### ವಿದ್ಯಾರ್ಥಿಗಳ ಪ್ರತಿಕ್ರಿಯೆ

(೨ನೇ ಪುಟದಿಂದ)

ಹುಟ್ಟಿ ನಶಿಸುವ ಪತ್ರಿಕೆಗಳು...." ಮುಂತಾಗಿ ಸಣ್ಣ ಪತ್ರಿಕೆಗಳ ಜಾತಿಯನ್ನು ಮೂದಲಿಸಿದ್ದಾರೆ. ಅವರ ಪತ್ರ 'ಶೃಂಕೋನ'ದಲ್ಲಿ ಪೂರ್ತಿ ಪ್ರಕಟವಾಗಿದೆ.)

ಶಿಲ್ಲೆ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರು ಬರೆದ ಪತ್ರದಲ್ಲಿ, ಮುಖ್ಯೋಪಾಧ್ಯಾಯರ ಮತ್ತು ಶಾಲಾಭಿವೃದ್ಧಿ ಸಮಿತಿಯವರ ಪರದಿಯಂತೆ ಮೇಲಧಿಕಾರಿಗಳು ಬೇರೆ ಶಿಕ್ಷಕರನ್ನು ನೇಮಿಸಿ ಎರಡೂ ಶಾಲೆಗಳು ಸಮರ್ಪಕವಾಗಿ ನಡೆಯುವಂತೆ ತಕ್ಷಣಿಕ ಕ್ರಮ ಕೈಗೊಂಡಿದ್ದಾರೆಂದು ತಿಳಿಸಿದ್ದಾರೆ.

ಹಿರಿಯ ಶಿಕ್ಷಕರಾದ ಎಲ್. ಗೋಪಾಲರವರ ಪತ್ರದಲ್ಲಿ, ತಮ್ಮ ಅನಾರೋಗ್ಯದ ಕಾರಣ ಮುಖ್ಯೋಪಾಧ್ಯಾಯರ ಜವಾಬ್ದಾರಿಯನ್ನು ಬೇರೊಬ್ಬ ಶಿಕ್ಷಕರಿಗೆ ವಹಿಸಿಕೊಡಲು ತಮಗೆ ವಿದ್ಯಾಧಿಕಾರಿಗಳು ಅನುಮತಿ ಕೊಟ್ಟಿದ್ದೇ ಹೊರತು, 'ಅನುಭವ' ಎಂದು ಹಿಂದಿಲ್ಲ ಎಂದಿದ್ದಾರೆ. ಇದಲ್ಲದೆ ಶಿಕ್ಷಕಿ ಶ್ರೀಮತಿ ಲಲಿತಾ ಪಿ. ಪ್ರಸಾದ್ ಅವರು ತಮಗೆ ಹಿರಿಯ-ಕಿರಿಯ ಶಾಲೆಗಳ ಭೇದ ಭಾವವಿಲ್ಲವೆಂದೂ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕೆಲಸ ಮಾಡಿದ್ದ ತಮ್ಮ ಅನುಭವದ ಆಧಾರದ ಮೇಲೆ ಮುಖ್ಯೋಪಾಧ್ಯಾಯರ ಜೊತೆ ಚರ್ಚಿಸಿ ತಮ್ಮನ್ನು ನೇಮಕ ಮಾಡಲಾಗಿದೆಯೆಂದೂ, 'ಅನುಭವ'ವು ಪತ್ರ ಬರೆಯಲಾಗಿರುವ ಭಾಷೆಯ ಸ್ವಭಾವದ ವೃತ್ತಿಗೆ ಕ್ಕೆ ಮಸಿ ಬಳಿಯುವ ಪ್ರಯತ್ನವಾಗಿದೆಯೆಂದೂ ಬರೆದಿದ್ದಾರೆ.

[ಈ ಪ್ರಕರಣವನ್ನು ಇಲ್ಲಿಗೆ ಮುಕ್ತಾಯ ಮಾಡಿದ್ದೇವೆ. –ಸಂಪಾದಕ.]

## ಗುಳಮಾವು ಮರ ಕೆತ್ತಿದ 'ನಿಜವಾದ'

# ಅಪರಾಧಿಗಳ ಮೇಲೆ ಖಟ್ಲೆ - ಸೂರ್ಯಾಚಾರ್

ಶೃಂಗೇರಿ: ಈ ವಲಯದ ಹಲವೆಡೆ ಗುಳ ಮಾವಿನ ಮರಗಳನ್ನು ಕೆತ್ತಿದ ನಿಜವಾದ ಅಪರಾಧಿಗಳನ್ನು ಪತ್ತೆಹಚ್ಚಿ ನ್ಯಾಯಾಲಯದಲ್ಲಿ ಖಟ್ಲೆ ಹೂಡುವುದಾಗಿ ವಲಯ ಅರಣ್ಯಾಧಿಕಾರಿ ಸೂರ್ಯಾಚಾರ್ ತಿಳಿಸಿದ್ದಾರೆ.

ತಾವು ಈ ಬಗ್ಗೆ ತೀವ್ರವಾದ ತನಿಖೆ ಕ್ರಮಗಳನ್ನು ತೆಗೆದುಕೊಂಡಿರುವುದಾಗಿ ತಿಳಿಸಿರುವ ಅವರು, ಅಬೂಬಕರ್ ಎಂಬ ಅರಣ್ಯ ಕಂಟ್ರಾಕ್ಟರನ್ನು ಹಿಡಿದು ೧೦೦೦ ರೂ. ದಂಡ ವಿಧಿಸಿದೆ, ಶೀರ್ಲು ಪ್ರದೇಶದಲ್ಲಿ ಗುಳಮಾವಿನ ತೊಪ್ಪೆ ಸಂಗ್ರಹವನ್ನೂ, ಕಿಗ್ಗದಲ್ಲಿ ಮುರುಗನ ಹುಳಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಎಂದು ಹೇಳಿದ್ದಾರೆ.

ಮುರುಗನ ಹುಳಿ ಸಂಗ್ರಹದ ಹಕ್ಕನ್ನು ಗಿರಿಜನ ಸೇವಾ ಸಹಕಾರ ಸಂಘಕ್ಕೆ ವಹಿಸಲಾಗಿದ್ದು, ಅವರು ಅದರ ಸಂಗ್ರಹಣೆಗೆ ಅಪ್ಪಣೆ ಚೀಟಿ ಕೊಡುತ್ತಾರೆ. ಹೊರಗಿನವರು ಯಾರಾದರೂ ಇಂಥ ಅಪ್ಪಣೆ ಚೀಟಿ ಇಲ್ಲದೆ ಹುಳಿ ಸಂಗ್ರಹಿಸುತ್ತಿದ್ದರೆ ಗ್ರಾಮಸ್ಥರು ಅವರನ್ನು ಪ್ರಶ್ನಿಸಲು, ಅಧಿಕಾರಿಗಳಿಗೆ ದೂರು ಕೊಡಲು ಅವಕಾಶವಿದೆ ಎಂದೂ ಸೂರ್ಯಾಚಾರ್ ತಿಳಿಸಿದ್ದಾರೆ.

## ಅತಿವೃಷ್ಟಿಯಿಂದ ಹಾನಿ

ಶಾನುವಳ್ಳಿ: ಈಚಿನ ಅತಿವೃಷ್ಟಿಯಿಂದ ನಿಲುವಾಗಿಲು ಮತ್ತು ಶಾನುವಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳಲ್ಲೇ ಸುಮಾರು ೨ ಲಕ್ಷ ರೂ. ನಷ್ಟ ಆಸ್ತಿಪಾಸ್ತಿ ನಷ್ಟವಾಗಿದೆಯೆಂದು ಗ್ರಾಮಸ್ಥರ ಅಂದಾಜು. ನಾಟಿ ಮಾಡಿದ್ದ ಭತ್ತದ ಬೆಳೆ ಮತ್ತು ತೋಟದಲ್ಲಿ ಅಡಿಕೆ ಮರಗಳು ವಿಪರೀತ ಹಾನಿಗೊಂಡಿರುವುದಲ್ಲದೆ ಎಲ್ಲಾ ಸಣ್ಣ ಪುಟ್ಟ ಹಳ್ಳಗಳೂ ಗದ್ದೆ-ತೋಟಗಳ ಮೇಲೆ ನುಗ್ಗಿ ಧಾಂಧಲೆ ಮಾಡಿವೆ.

'ಕೂಲಿಗಾಗಿ ಕಾಳು' ಯೋಜನೆಯಲ್ಲಿ (ರಾ. ಗ್ರಾ ಉ. ಯೋಜನೆ) ಮಾಡಿಸಿದ ಹಳ್ಳದ ಕೆಲಸಗಳು ಹಾನಿಗೊಳಗಾಗಿವೆಯೆನ್ನಲಾಗಿದೆ.

ಶಾನುವಳ್ಳಿಯಲ್ಲಿ ಈ ಯೋಜನೆಯಲ್ಲಿ ಕಟ್ಟಿಸಿದ್ದ ಹೊಸ ಬಸ್ ಶೆಲ್ಟರ್‌ನ ಒಂದು ಬದಿ ಪೂರ್ತಿ ಕುಸಿದಿದೆ.

## ಎಸ್ ಎಫ್ ಐ ಸೇರಲು ಕರೆ

ಶೃಂಗೇರಿ, ಕೊಪ್ಪ, ನರಸಿಂಹರಾಜಪುರ, ಬಾಳೆಹೊನ್ನೂರು, ಹಾಗೂ ಹರಿಹರಪುರ ಕಾಲೇಜುಗಳಲ್ಲಿ ಭಾರತೀಯ ವಿದ್ಯಾರ್ಥಿ ಫೆಢರೇಶನ್ (ಎಸ್ ಎಫ್ ಐ) ಸ್ಥಾಪಿಸುವ ಅಥವಾ ಹಳೆಯದನ್ನು ನವೀಕರಿಸುವ ಆಸಕ್ತಿ ಉಳ್ಳ ವಿದ್ಯಾರ್ಥಿಗಳು ಕೆ. ಎಂ. ವಿಠಲ ಹೆಗ್ಡೆ, ಅಧ್ಯಕ್ಷ, ಪ್ರಜಾಸತ್ತಾತ್ಮಕ ಯುವಜನ ಸಂಘಟನೆ, ಶೃಂಗೇರಿ-ಇವರನ್ನು ಸಂಪರ್ಕಿಸಬಹುದೆಂದು ಕೋರಲಾಗಿದೆ.

## ಸ್ವಾತಂತ್ರ್ಯೋತ್ಸವ

ಕೊಪ್ಪ: ೩೬ ನೇ ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಧ್ವಜಾರೋಹಣ ಮಾಡಿದ ತಹಸೀಲ್ದಾರ್ ಹೆಚ್. ಎಂ. ನಾಗಪ್ಪ, ಸ್ವಾತಂತ್ರ್ಯ ದಿನದ ಮಹತ್ವ ವಿವರಿಸಿ ಎಲ್ಲರಿಗೂ ಶುಭ ಹಾರೈಸಿದರು.

ಇದಕ್ಕೆ ಮೊದಲು ಶಾಲಾ ಮಕ್ಕಳಿಂದ ಪಥ ಸಂಚಲನ ನಡೆಯಿತು. ಎನ್. ಸಿ. ಸಿ ಯಿಂದ ಕವಾಯಿತು ಪ್ರದರ್ಶಿಸಲಾಯಿತು. ಕೊನೆಯಲ್ಲಿ ಸಿಹಿ ಹಂಚಲಾಯಿತು.

## ೪ನೇ ದರ್ಜೆ ನೌಕರರ ಸಂಘದ ಸರ್ವ ಸದಸ್ಯರ ಸಭೆ

ಕೊಪ್ಪ ತಾಲ್ಲೂಕು ರಾಜ್ಯ ಸರ್ಕಾರಿ ನಾಲ್ಕನೇ ದರ್ಜೆ ನೌಕರರ ಸಂಘದ ಸರ್ವ ಸದಸ್ಯರ ಸಭೆಯು ೮. ಅರುಂದು ಬಾಳಗಡಿಯಲ್ಲಿ ಜಿಲ್ಲಾ ಸಂಘದ ಅಧ್ಯಕ್ಷ ಡಿ. ಗೋವಿಂದಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು.

ನೂತನ ಸಾಲಿಗೆ ತಾಲ್ಲೂಕು ಸಂಘಕ್ಕೆ ಬಿ. ಎನ್. ಚಂದ್ರಶೇಖರ್ (ಅಧ್ಯಕ್ಷರು), ಎಂ. ವಿ. ವಿಠಲ್ (ಉಪಾಧ್ಯಕ್ಷ), ಪಿ. ವಿ. ಶೇಷಗಿರಿ (ಕಾರ್ಯದರ್ಶಿ), ಸಯದ್ ಮೊಹಿದ್ದೀನ್ (ಸಂಘಟನಾ ಕಾರ್ಯದರ್ಶಿ), ಹಾಗೂ ಬಿ. ಕೆ. ಸಿದ್ದೇಗೌಡ (ಖಜಾಂಚಿ) ಇವರುಗಳು ಸರ್ವಾನುಮತದಿಂದ ಆಯ್ಕೆಯಾದರು.

ಬಿ. ಕೆ. ಸಿದ್ದೇಗೌಡ ಸ್ವಾಗತಿಸಿದರು. ಬಿ. ಎನ್. ಚಂದ್ರಶೇಖರ್ ವಂದಿಸಿದರು.

## ಅಗಸ್ಟ್ ೨೦ರಿಂದ ಪ್ರ. ದ. ಕಾಲೇಜು ಆರಂಭ

ಕೊಪ್ಪ: ಇಲ್ಲಿನ ಪ್ರಥಮ ದರ್ಜೆ ಕಾಲೇಜು ಇದೇ ೨೦ರಿಂದ ಆರಂಭವಾಗುವುದೆಂದು ಪ್ರಕಟಿಸಲಾಗಿದೆ. ಬಹುತೇಕ ಉಪನ್ಯಾಸಕರ ನೇಮಕವಾಗಿದೆ. ವಿದ್ಯಾರ್ಥಿಗಳ ಸಂಖ್ಯೆ ೧೨೫ ದಾಟಿದ್ದು ಕೊನೇ ಗಳಿಗೆಯ ಪ್ರವೇಶ ಇನ್ನೂ ನಡೆಯುತ್ತಿದೆ.

## ತೋರಣಮಾವು-ಜೋಳ್ದಾಳು ರಸ್ತೆ ರಿಪೇರಿಗೆ ೧.೭ ಲಕ್ಷ ರೂ.

ಚಿಕ್ಕಮಗಳೂರು: ಆಲ್ದೂರು-ಚಿಕ್ಕಮಗಳೂರು ನಡುವಿನ ನೇರರಸ್ತೆ ರಾಷ್ಟ್ರೀಕರಣವಾಗಿ, ಖಾಸಗಿ ಬಸ್ಸುಗಳಿಗೆ ಈ ಎರಡು ಊರುಗಳ ನಡುವೆ ಓಡಾಡಲು ಏಕಮಾತ್ರ ಸಂಪರ್ಕ ರಸ್ತೆಯಾದ ಸುಮಾರು ೬ ಕಿ. ಮೀ. ಉದ್ದದ ಜೋಳದಾಳು-ತೋರಣಮಾವು ರಸ್ತೆಯ ದುರಸ್ತಿಕೆಲಸ ೧.೭ ಲಕ್ಷರೂ. ವೆಚ್ಚದಲ್ಲಿ ಸದ್ಯವೇ ಆರಂಭವಾಗಲಿದೆ.

ವಿಪರೀತ ವಾಹನ ಸಂಚಾರವಿರುವ ಈ ರಸ್ತೆ ಹೊಂಡ, ಕೊರಕಲುಗಳಿಂದ ತುಂಬಿ ಹೋಗಿ ಜಿಲ್ಲೆಯ ೫ ತಾಲ್ಲೂಕುಗಳ ಜನರಿಗೆ ಈ ಮಾರ್ಗದ ಪ್ರಯಾಣವೊಂದು ಅನಿವಾರ್ಯ ಯಾತನೆಯಾಗಿತ್ತು.

## ಶೃಂಗೇರಿ ತಾಲ್ಲೂಕು ಆರ್ಯ ಈಡಿಗ ಸಂಘ

ಗುಬ್ಬಗೋಡು: ಶೃಂಗೇರಿ ತಾಲ್ಲೂಕಿನ ಆರ್ಯ ಈಡಿಗ ಜನಾಂಗದ ಸಭೆ ಇಲ್ಲಿನ ಶಾಲೆಯ ಆವರಣದಲ್ಲಿ ಮಾಣಿಬೈಲು ಪುಟ್ಟಸ್ವಾಮಿಯವರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು.

ಜನಾಂಗದ ಏಳಿಗೆ, ಇತರ ಜನಾಂಗದವರ ಜೊತೆ ಸಹಬಾಳ್ವೆ, ಜನಾಂಗದ ಬಡ ವಿದ್ಯಾರ್ಥಿಗಳಿಗಾಗಿ ಶೃಂಗೇರಿಯಲ್ಲಿ ವಿದ್ಯಾರ್ಥಿ ನಿಲಯ ತೆರೆಯುವುದು, ಜನಾಂಗದಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ಮತ್ತು ಅನಕ್ಷರಸ್ಥರಿಗೆಸಹಾಯಮುಂತಾದ ಸಂಘದ ಧ್ಯೇಯ ಮತ್ತು ರೂಪುರೇಷೆಗಳನ್ನು ಅಗಸವಳ್ಳಿ ವೆಂಕಟೇಶ್ ವಿವರಿಸಿದರು.

ಜಿ. ಎನ್. ಸುಬ್ರಮಣ್ಯ ಸ್ವಾಗತಿಸಿದರು ಹೆಚ್. ವಿ. ನಾಗರಾಜ್ ವಂದಿಸಿದರು.

ನೂತನ ಸಾಲಿನ ಪದಾಧಿಕಾರಿಗಳು: ಮಾಣಿಬೈಲ್ ಪುಟ್ಟಸ್ವಾಮಿ (ಅಧ್ಯಕ್ಷ), ಹಿರೆಮನೆ ಕೃಷ್ಣಮೂರ್ತಿ (ಉಪಾಧ್ಯಕ್ಷ), ಅಗಸವಳ್ಳಿ ವೆಂಕಟೇಶ್ (ಕಾರ್ಯದರ್ಶಿ), ಹೆಗ್ತೂರ್ ನಾಗರಾಜ್ (ಸಹ ಕಾರ್ಯದರ್ಶಿ), ಕೊಂಡಗೇರಿಚಿನ್ನಯ್ಯನಾಯ್ಕ(ಖಜಾಂಚಿ) ಹಾಗೂ ೧೫ ಜನ ಕಾರ್ಯಕಾರಿ ಸಮಿತಿ ಸದಸ್ಯರು.

## ಎ. ಐ. ಎಸ್. ಎಫ್ ಪದಾಧಿಕಾರಿಗಳು

ಕೊಪ್ಪ: ಇಲ್ಲಿನ ಕಿರಿಯ ಕಾಲೇಜಿನ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ನಿನ ಈ ವರ್ಷದ ಪದಾಧಿಕಾರಿಗಳು ಇವರು—

ಅಧ್ಯಕ್ಷ: ಕೆ. ನಾಗೇಶ್, ಉಪಾಧ್ಯಕ್ಷರು: ರಾಜಶೇಖರ್ ಮತ್ತು ಬಾಲಾಜಿ, ಕಾರ್ಯದರ್ಶಿ: ಅಶೋಕ, ಸಹಕಾರ್ಯದರ್ಶಿ: ನಂದೀಶ್, ಖಜಾಂಚಿ: ಎಸ್. ಜಲಂಧರ್, ಹಾಗೂ ಹತ್ತು ಜನ ಕಾರ್ಯಕಾರೀ ಸಮಿತಿ ಸದಸ್ಯರು.

## ನಿಧನ

ಕೊಪ್ಪ: ಇಲ್ಲಿನ ನಾಯಕ್ ಬಳಗದ ನರಹರಿ ರಾಯರ ಮಗ ರವೀಂದ್ರ ಈಚೆಗೆ ಹೃದಯಾಘಾತದಿಂದ ನಿಧನರಾದರು. ೪೦ ವರ್ಷ ವಯಸ್ಸಿನ, ಮಾಜಿ ಯೋಧರಾದ ಇವರು ಕಳಸದಲ್ಲಿ ಗ್ಯಾರೇಜ್ ನಡೆಸುತ್ತಿದ್ದರು. ಪತ್ನಿ, ಇಬ್ಬರು ಮಕ್ಕಳು ಮತ್ತು ತಂದೆ-ತಾಯಿಯರನ್ನು ಅಗಲಿರುವ ಮೃತರಿಗೆ ಅಪಾರ ಬಂಧು-ಮಿತ್ರರು ಶ್ರದ್ಧಾಂಜಲಿ ಅರ್ಪಿಸಿದರು.

## ಪರಿಹಾರದ ಮೊತ್ತ ಏರಿಕೆ

ಕೊಪ್ಪ: ಚಿಕ್ಕಮಗಳೂರು, ಶಿವಮೊಗ್ಗ, ದ. ಕ., ಉ. ಕ. ಮತ್ತು ಧಾರವಾಡ ಜಿಲ್ಲೆಗಳಲ್ಲಿ ಈ ಬಾರಿ ನೆರೆಯಲ್ಲಿ ಮನೆ ಕಳಕೊಂಡವರಿಗೆ ಪರಿಹಾರದ ಮೊತ್ತವನ್ನು ಹೆಚ್ಚಿಸಿ ಸರ್ಕಾರ ಆಜ್ಞೆ ಹೊರಡಿಸಿದೆ. ನಗದು ಮತ್ತು ಕಟ್ಟಡ ಸಾಮಗ್ರಿ ಒಟ್ಟಿಗೆ ೧,೫೦೦ ರೂ. ವರೆಗೆ ಮಂಜೂರು ಮಾಡಲು ಜಿಲ್ಲಾಧಿಕಾರಿಗಳಿಗೆ ಈವರೆಗೆ ಅಧಿಕಾರವಿದ್ದುದನ್ನು ಒಟ್ಟು ೩,೫೦೦ ರೂ.ಗೆ ಏರಿಸಲಾಗಿದೆ. ಈ ಆಜ್ಞೆ ೮. ೧೦ ರಿಂದ ೩ ತಿಂಗಳವರೆಗೆ ಜಾರಿಯಲ್ಲಿರುತ್ತದೆ.

ಈಗಾಗಲೇ ಪರಿಹಾರದ ಹಣ ಪಡೆದಿರುವವರಿಗೂ ಈ ಆಜ್ಞೆಯ ಲಾಭ ಸಿಗುವುದೇ ಎಂಬುದು ಈ ವಾರ ನಡೆಯಲಿರುವ ಕಂದಾಯ ಅಧಿಕಾರಿಗಳ ಸಭೆಯ ನಂತರ ಸ್ಪಷ್ಟವಾಗಲಿದೆ.

## ಸುಬಾಬುಲ್ ವಗೈರೆ ಸಸಿಗಳ ವಿತರಣೆ

ಶೃಂಗೇರಿ: ಇಲ್ಲಿನ ಕೃಷಿಇಲಾಖೆ ಮತ್ತು ಅರಣ್ಯ ಇಲಾಖೆಗಳು ಸುಬಾಬುಲ್, ಹಲಸು, ಜಾಲಿ, ಗ್ಲಿರಿಸೀಡಿಯಾ ಮುಂತಾದ ಹಲವು ಬಗೆಯ ಉಪಯುಕ್ತ ಸಸಿಗಳನ್ನು ಗ್ರಾಮಸ್ಥರಿಗೆ ಪುಕ್ಕಟೆಯಾಗಿ ಹಂಚಿವೆ.

ನೆಮ್ಮಾರಿನಲ್ಲಿರುವ ಅರಣ್ಯ ಇಲಾಖೆಯ ನರ್ಸರಿಯಿಂದ ಅರಣ್ಯ ಇಲಾಖೆ ೨ಲಕ್ಷ ಸಸಿಗಳನ್ನೂ, ಕೃಷಿಇಲಾಖೆ ೩೦ಸಾವಿರ ಸಸಿಗಳನ್ನೂ ಹಂಚಿವೆ. ಆಸಕ್ತಿ ಉಳ್ಳವರು ಕೃಷಿ ಇಲಾಖೆಯನ್ನು ಸಂಪರ್ಕಿಸಿ ಸಸಿಗಳನ್ನು ಪುಕ್ಕಟೆಯಾಗಿ ಪಡೆಯಬಹುದೆಂದು ಸಹಾಯಕ ನಿರ್ದೇಶಕ ಎನ್. ಬಿ. ಮುದ್ದಲಿಂಗೇಗೌಡ ತಿಳಿಸಿದ್ದಾರೆ.

ಅಡ್ಡಗದ್ದೆ ಗ್ರಾಮವನ್ನು ದತ್ತು ತೆಗೆದುಕೊಂಡಿರುವ ಕೃಷಿಇಲಾಖೆ ಜೈವಿಕ ಅನಿಲ ಮತ್ತು ಸಗಣಿ ಅನಿಲಯಂತ್ರಗಳ ಬಗ್ಗೆ ಪ್ರಚಾರ ನಡೆಸುತ್ತಿದೆ. ಇಬ್ಬರು ರೈತರು ಗೋಬರ್ ಗ್ಯಾಸ್ ಸೌಲಭ್ಯ ಪಡೆದಿದ್ದಾರೆ. ಇವುಗಳಿಗೆ ತಗಲುವ ಖರ್ಚಿನಲ್ಲಿ ಶೇ.೨೦ ಸಹಾಯಧನವಾಗಿ ಸಿಂಡಿಕೇಟ್ ಬ್ಯಾಂಕಿನಿಂದ ಕೊಡಲಾಗುತ್ತದೆ.

## ಸಿ.ಆರ್.ಸಿ. ಕಳೆದು ಹೋಗಿದೆ

ಡಾ|| ಎ. ಪಿಂಟೋ ಇವರು ಶ್ರೀ ಜೆ.ಎ. ಪಿಂಟೋ, ತಲಮಕ್ಕಿ ಎಸ್ಟೇಟ್, ಕೊಪ್ಪ ತಾ|| ಇವರ ಸಿಆರ್‌ಸಿ ನಂ 8479 ದಿನಾಂಕ 28-7-1971ರ ಸಿಆರ್‌ಸಿ ಕಳೆದು ಹೋಗಿರುವುದಾಗಿ ವರದಿಯಾಗಿದ್ದು ಡೂಪ್ಲಿಕೇಟ್ ಸಿಆರ್‌ಸಿಗಾಗಿ ಅರ್ಜಿ ಸಲ್ಲಿಸಿರುತ್ತಾರೆ. ಕಾಫಿ ಮಂಡಳಿ ಇವರಿಗೆ ಡೂಪ್ಲಿಕೇಟ್ ಸಿಆರ್‌ಸಿ ಕೊಡಬಹುದೆಂದು ಅಭಿಪ್ರಾಯಿಸಿದೆ. ಈ ಡೂಪ್ಲಿಕೇಟ್ ಸಿಆರ್‌ಸಿ ಕೊಡುವ ಬಗ್ಗೆ ಯಾರದಾದರೂ ಆಕ್ಷೇಪಣೆ ಇದ್ದರೆ ಈ ಪ್ರಕಟಣೆ ಪ್ರಕಟವಾದ 15 ದಿನಗಳೊಳಗಾಗಿ ಕೊಪ್ಪ ತಹಸೀಲ್ದಾರ್‌ರವರ ಕಚೇರಿಗೆ ತಿಳಿಸಬೇಕಾಗಿ ಕೋರಿದೆ.

ಜಮೀನಿನ ವಿವರ: ತಲಮಕ್ಕಿಎಸ್ಟೇಟ್, ತಲಮಕ್ಕಿ ಗ್ರಾಮ; 54ಎಕರೆ 30ಗುಂಟೆ



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್.

ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.